# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1868
ಉತ್ತರಿಸುವ ದಿನಾಂಕ : 24.03.2020
ಸದಸ್ಯರ ಹೆಸರು : ಶ್ರೀ ಎನ್. ಎಸ್. ಬೋಸ್‌ರಾಜು (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವವರು : ಗಣಿ ಮತ್ತು ಭೂ ವಿಜ್ಞಾನ ಸಚಿವರು.

| ಪ್ರಶ್ನೆ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಕಂಪನಿಯಲ್ಲಿ ಕೆಲಸ ಮಾಡುತ್ತಿರುವ ಖಾಯಂ ಕಾರ್ಮಿಕರ ಸಂಖ್ಯೆ ಎಷ್ಟು ಹಾಗೂ ಗುತ್ತಿಗೆ ಕಾರ್ಮಿಕರ ಸಂಖ್ಯೆ ಎಷ್ಟು; ಬುದ್ದನ್ನಿ ಮತ್ತು ಊಟಿಯಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರ ಸಂಖ್ಯೆ ಎಷ್ಟು; | ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತವು ಕರ್ನಾಟಕ ಸರ್ಕಾರಿ ಸ್ವಾಮ್ಯದ ಒಂದು ಸಾರ್ವಜನಿಕ ಉದ್ದಿಮೆಯಾಗಿದ್ದು, ಹಟ್ಟಿ ಚಿನ್ನದ ಗಣಿ ಕಂಪನಿಯ ಘಟಕದಲ್ಲಿ ಒಟ್ಟು 4028 ಖಾಯಂ ನೌಕರರಿದ್ದು, ಗುತ್ತಿಗೆ ನೌಕರರ ಸಂಖ್ಯೆ 21 ಹಾಗೂ 06 ಗುತ್ತಿಗೆ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ.<br>ಅದರಲ್ಲಿ, ಊಟಿ ಚಿನ್ನದ ಘಟಕದ ಹಾಜರಾತಿಯಲ್ಲಿ 109 ಮತ್ತು ಹೀರಾಬುದ್ದಿನ್ನಿ ಚಿನ್ನದ ಘಟಕ ಹಾಜರಾತಿಯಲ್ಲಿ 134 ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ. |
| ಆ) | ರಾಯಚೂರು ಜಿಲ್ಲೆಯ ಬುದ್ದಿನ್ನಿ ಚಿನ್ನದ ಗಣಿ ಉದ್ದಿಮೆಯಿಂದ ಆ ಗ್ರಾಮಸ್ಥರಿಗೆ ಆಗುವ ತೊಂದರೆ ನಿವಾರಣೆಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಸದರಿ ಗ್ರಾಮವನ್ನು ಸ್ಥಳಾಂತಾರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳನ್ನು; | ಬುದ್ದಿನ್ನಿ ಗ್ರಾಮವನ್ನು ಸ್ಥಳಾಂತರ ಮಾಡಲು ಹಟ್ಟಿ ಚಿನ್ನದ ಗಣಿ ಆಡಳಿತ ಮಂಡಳಿಯು ಜಿಲ್ಲಾಧಿಕಾರಿಗಳ ಸಹಕಾರ ಕೋರಲಾಗಿದ್ದು, ಮೊದಲ ಹಂತದಲ್ಲಿ ತಹಸೀಲ್ದಾರ್ ಸಿರವಾರ, ಜಿಲ್ಲಾಡಳಿತ ಮತ್ತು ಹಟ್ಟಿ ಚಿನ್ನದ ಗಣಿಯ ಅಧಿಕಾರಿಗಳು ದಿನಾಂಕ:12.02.2020 ರಂದು ಗ್ರಾಮ ಸಭೆಯನ್ನು ನಡೆಸಿ ಗ್ರಾಮಸ್ಥರ ಅಭಿಪ್ರಾಯವನ್ನು ಪಡೆದಿರುತ್ತಾರೆ.<br>ಈ ನಿಟ್ಟಿನಲ್ಲಿ ಮುಂದಿನ ಕ್ರಮ ಕೈಗೊಳ್ಳುವ ಪ್ರಕ್ರೀಯೆ ಜಾರಿಯಲ್ಲಿರುತ್ತದೆ. ಇದಲ್ಲದೆ ಗಣಿ ಚಟುವಟಿಕೆಗಳಿಂದ ಬುದ್ದಿನ್ನಿ ಗ್ರಾಮಸ್ಥರಿಗೆ ಏನಾದರೂ ತೊಂದರೆ ಆಗುತ್ತಿದೆಯೆ ಎನ್ನುವ ಬಗ್ಗೆ NRIM ಸಂಸ್ಥೆಯಿಂದ ಅಧ್ಯಯನ ಮಾಡಲಾಗಿದೆ. |
| ಇ) | ರಾಯಚೂರು ಜಿಲ್ಲೆಯ ಬುದ್ದಿನ್ನಿ ಗಣಿ ಸ್ಥಾಪನೆಗೆ ಭೂ ಸ್ವಾಧೀನ ಮಾಡಿಕೊಂಡಿರುವ ಭೂಮಿ ಎಷ್ಟು; ಸದರಿ ಭೂ ವಂಚಿತ ರೈತರಿಗೆ ಸರ್ಕಾರ ನೀಡಿರುವ ಸೌಲಭ್ಯಗಳು ಏನು? | ಬುದ್ದಿನ್ನಿ ಚಿನ್ನದ ಗಣಿ ಸ್ಥಾಪನೆಗೆ ಒಟ್ಟು 55.36 ಎಕರೆ ಜಮೀನನ್ನು ಭೂ ಸ್ವಾಧೀನ ಪಡೆದುಕೊಂಡಿದ್ದು ಭೂ ಮಾಲಿಕರಿಗೆ ಭೂ ಪರಿಹಾರ ಮೊತ್ತವನ್ನು ಪಾವತಿಸುವುದರೊಂದಿಗೆ ಒಟ್ಟು 30 ಭೂ ಮಾಲಿಕರ ಕುಟುಂಬ ಸದಸ್ಯರಿಗೆ ಕಂಪನಿಯಲ್ಲಿ ಉದ್ಯೋಗ ನೀಡಲಾಗಿದೆ. |

ಸಂಖ್ಯೆ: ಸಿಐ 30 ಎಂಪಿಪಿ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂ ವಿಜ್ಞಾನ ಸಚಿವರು.